## ॥ ಯೇನ ಶ್ರೇಯೋಽಹಮಾಪ್ನುಯಾಮ್ ॥

''ನಾನು ಯಾವುದರಿಂದ ಶ್ರೇಯಸ್ಸನ್ನು (ಮೋಕ್ಷವನ್ನು) ಹೊಂದೇನು?''

ಇದು ಅರ್ಜುನನ ಪ್ರಶ್ನೆ - ನಮ್ಮೆಲ್ಲರ ಪರವಾಗಿ ಕೃಷ್ಣನ ಮುಂದೆ ಇಟ್ಟದ್ದು. ಇದಕ್ಕೆ ಉತ್ತರವೇ ಗೀತೆ. ಅರ್ಜುನ ತನ್ನ ಮನವನ್ನು ಬಿಚ್ಚಿಟ್ಟ. ಏನನ್ನೂ ಬಚ್ಚಿಡಲಿಲ್ಲ. ಅರ್ಜುನನ ಪ್ರಶ್ನೆಯಲ್ಲಿ ಪಾರದರ್ಶಕತೆ ಇತ್ತು. ಕೃಷ್ಣನು ಮುಗುಳ್ನಕ್ಕು ಎಲ್ಲಕ್ಕೂ ಉತ್ತರಿಸಿದ. ಪ್ರಶ್ನೆಯಷ್ಟೇ ಉತ್ತರವೂ ಸ್ಪಷ್ಟವಾಗಿತ್ತು. ಆದ್ದರಿಂದಲೇ ಕೃಷ್ಣನೂ ಶಾಸ್ತ್ರದ ರಹಸ್ಯವನ್ನು ''ಅನಘ''ನಾದ ''ಅನಸೂಯ''ನಾದ ''ಅರ್ಜುನ''ನಿಗೆ ತೆರೆದಿಟ್ಟ.

ಗೀತೆಯ ಹಿನ್ನೆಲೆಯಲ್ಲಿ ನಮ್ಮನ್ನು ನಾವು ಭಗವಂತನ ಮುಂದೆ, ಸದ್ಗುರುಗಳ ಮುಂದೆ ಬಿಚ್ಚಿಡಬೇಕು. ಅವರು ಕೃಷ್ಣಶಾಸ್ತ್ರವನ್ನು ಉಪದೇಶಿಸುತ್ತಾರೆ. ಶಾಸ್ತ್ರಕ್ಕೂ ನಮ್ಮ ಸ್ಥಿತಿಗೂ ಇರುವ ವ್ಯತ್ಯಾಸ "GAP" ತಿಳಿದುಕೊಂಡು ನಡೆದರೆ ನಾವೂ ಸಂಸಾರದಿಂದ ಮೋಕ್ಷದ ಮೆಟ್ಟಿಲುಗಳನ್ನು ಒಂದೊಂದಾಗಿ ಹತ್ತುತ್ತಾ ಹೋಗಬಹುದು. ಮೆಟ್ಟಿಲೋತ್ಸವ ಮಾಡಿ ಶ್ರೀನಿವಾಸನ ದರ್ಶನ ಮಾಡಿಕೊಂಡು ಕೊನೆಗೆ ''ಶ್ರೇಯಸ್ಸ''ನ್ನು ಪಡೆದೇವು.

ಇದಕ್ಕಾಗಿ ಈ ಪುಟ್ಟ ಹೊತ್ತಿಗೆ ''ಸಾಧಕರಿಗೆ ಪ್ರಥಮ ಸೋಪಾನ''.

ಸಾಧಕರಿಗೆ

# ಪ್ರಥಮ ಸೋಪಾನ


ಸಂಪಾದನೆ

ವೇದಗರ್ಭ - ಜಿ. ಶೇಷಗಿರಿರಾವ್. ಬಿ.ಎ.ಬಿ.ಎಸ್‌ಸಿ. (ಕೃಷಿ)



ಪ್ರಕಾಶಕರು

**ವೇದಗರ್ಭ ಪ್ರಕಾಶನ**

76. 2ನೇ. ಎ. ಅಡ್ಡರಸ್ತೆ, 3ನೇ ಮುಖ್ಯರಸ್ತೆ.
ನಾಗೇಂದ್ರ ಬ್ಲಾಕ್ ಬನಶಂಕರಿ 3ನೇ ಹಂತ
ಬೆಂಗಳೂರು - 560050
ದೂರವಾಣಿ - 26729827, 26721028

ಸಾಧಕರಿಗೆ ಪ್ರಥಮ ಸೋಪಾನ

a small collection of essential STOTHRAS - etc

collected by **Vedagarbha G. Sheshagiri Rao**
76. II A Cross. III Main. Nagendra Block.
BSK III Stage Bangalore - 560050.
Ph. 26729827 & 26721028.

Published with financial Assisstence of **Sri R.K. Shivaram**
in memory of his father Late **Sri R.G. Krishnamurthy**

Pages : 24



First Edition : 2006

Copies : 2,000

Books available at

1) Editor

2) Sri R.K. Shivaram.
410. 7th Main, 50 feet Road
Hanumantha Nagar, Bangalore - 19
Ph : 26606508 and 9845135230

Cover page Design : Sri K.M. Sheshagiri

"ಈ ಪುಸ್ತಕವನ್ನು ಶ್ರೀಯುತ ಆರ್.ಕೆ. ಶಿವರಾಮ ಇವರ ಪೂರ್ಣ ಆರ್ಥಿಕ ನೆರವಿನೊಂದಿಗೆ ಅವರ ತಂದೆ ದಿ. ಆರ್.ಜಿ. ಕೃಷ್ಣಮೂರ್ತಿ ಇವರ ನೆನಪಿಗಾಗಿ ಪ್ರಕಾಶಿಸಲಾಗಿದೆ."

Typeset & Printed by : Vagartha, 26527677, vagartha@yahoo.com

**SRI BHANDARAKERI MATHA**

*Car Street, Udupi - 576 101.*

Sri Bhagavatha Niketha, 1343, 2nd Phase Girinagara,
Bangalore-560 085. Phone : 26721527

# ಅನುಗ್ರಹ ಸಂದೇಶ

ಸ್ತುತಿಪ್ರಿಯನಾದ ಭಗವಂತನನ್ನು ಒಲಿಸಿಕೊಳ್ಳಲು ವಿಷ್ಣುಸಹಸ್ರನಾಮಾದಿ ಸ್ತೋತ್ರಗಳು ಅತ್ಯಾವಶ್ಯಕಗಳಾಗಿವೆ.

ಆದರೆ ಪ್ರಾಥಮಿಕ ಹಂತದಲ್ಲಿ ಆಧುನಿಕ ಭೌತಿಕ ಜೀವನದಲ್ಲಿ ಅವುಗಳ ಪಠಣವು ಸಾಧಕರಿಗೆ ಅಸಾಧ್ಯವಾಗಿದೆ.

ಈ ದೃಷ್ಟಿಯಿಂದ ಪ್ರಾಥಮಿಕ ಹಂತದಲ್ಲಿ ಸಾಧನ ಮಾರ್ಗದಲ್ಲಿ ಪ್ರವೇಶ ಬಯಸುವವರಿಗೆ ಪ್ರಥಮ ಸೋಪಾನ ರೂಪದಲ್ಲಿ ಕಿರುಸ್ತುತಿಪುಷ್ಪಗುಚ್ಛವನ್ನು ಅರ್ಪಿಸುವ ಪ್ರವೃತ್ತಿಯು ಶ್ಲಾಘನೀಯವಾಗಿದೆ.

ಈ ಉದ್ದೇಶದಿಂದ ಸ್ತೋತ್ರ ಸಂಪಾದನೆ - ಪ್ರಕಾಶನಕಾರ್ಯ ಮಾಡಿದ ಶ್ರೀ ಜಿ. ಶೇಷಗಿರಿರಾವ್, ವೇದಗರ್ಭ ಪ್ರಕಾಶನ ಇವರನ್ನು ಅಭಿನಂದಿಸಿ ಇವರಿಗೆ ಭಗವಂತನು ಹಾಗೂ ಮಧ್ವಗುರುಗಳು ಇನ್ನಷ್ಟೂ ಉಪಯುಕ್ತ ಗ್ರಂಥ ಪ್ರಕಾಶನ ಮಾಡುವ ಚೈತನ್ಯವನ್ನು ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇದಲ್ಲದೆ, ಈ ಪ್ರಕಾಶನದ ಸಂಪೂರ್ಣ ವೆಚ್ಚವನ್ನು ವಹಿಸಿ ಜಿಜ್ಞಾಸು ವರ್ಗಕ್ಕೆ ಅತಿ ಸುಲಭ ಬೆಲೆಯಲ್ಲಿ ತಲುಪಿಸುವ ಹೊಣೆಯನ್ನು ಹೊತ್ತ ಶ್ರೀ ಆರ್.ಕೆ. ಶಿವರಾಮ್ ಇವರನ್ನು ವಿಶೇಷವಾಗಿ ಅಭಿನಂದಿಸಿ ಹರಿ-ಗುರು-ಶ್ರೇಯಃ ಪ್ರಾರ್ಥನೆ ಮಾಡುತ್ತೇವೆ.

ಇತಿ ಶ್ರೀಮನ್ನಾರಾಯಣ ಸ್ಮರಣೆಗಳು

24-1-06
ಬೆಂಗಳೂರು

**ಶ್ರೀ ವಿದ್ಯೇಶತೀರ್ಥರು**
ಶ್ರೀ ಭಂಡಾರಕೇರಿ ಮಠ

**॥ ಶ್ರೀ ಗುರುಭ್ಯೋ ನಮಃ ಹರಿಃ ಓಂ ॥**

**॥ ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಂ ॥**

ತನ್ನ ಬದುಕು ಬಂಗಾರವಾಗಲು ಹತ್ತು ಹಲವು ಮಾರ್ಗಗಳನ್ನು ಮನುಷ್ಯನು ಆರಿಸಿಕೊಂಡಿದ್ದಾನೆ. ಹಣ, ಹಣದಿಂದ ಆಸ್ತಿ ಅಂತಸ್ತು, ಸುರೂಪಿ ಪತ್ನಿ, ಸುಂದರ ಮಕ್ಕಳ, ಸುಖಕರವಾದ ಲೌಕಿಕ ಜೀವನಗಳೇ ಜೀವನದ ಪರಮಾವಧಿ ಸಾಧನೆ ಎಂದು ಹೆಚ್ಚು ಜನರ ಭಾವನೆ. ಆದರೆ ಇವ್ಯಾವೂ ನಿಜವಾದ ಸುಖ ಕೊಡಬಲ್ಲವೇ? ಎಂಬುದು ಅಷ್ಟೇ ಪ್ರಶ್ನಾರ್ಹ. ಕಾರಣ ಇವ್ಯಾವೂ ನಮ್ಮೊಂದಿಗೆ ಬರುವುದಿಲ್ಲವೆಂದು ಎಲ್ಲರೂ ಬಲ್ಲವರಾದರೂ ಆ ಬಗ್ಗೆ ನೈಜ ವಿಶ್ವಾಸ ಪ್ರಾಯಃ ಬಹಳ ಜನರಿಗೆ ಇರುವುದೇ ಇಲ್ಲ.

ಲೌಕಿಕ ಸುಖಗಳ ಇತಿಮಿತಿಯನ್ನರಿಯುವುದೇ ನಿಜವಾದ ಜೀವನ. ಶಾಶ್ವತ ಸುಖದೆಡೆಗೆ ಪ್ರಯತ್ನಿಸಲು ಶಾಸ್ತ್ರಜ್ಞಾನ ಅವಶ್ಯ. ಶಾಸ್ತ್ರಜ್ಞಾನ ಹಾಗೂ ನಮ್ಮ ಜೀವನಗಳನ್ನು ತುಲನೆ ಮಾಡಿದಾಗ ಅವರೆಡರ ನಡುವೆ ಭಾರಿಕಂದರ ಇರುವುದು ನಮಗೆ ತಿಳಿಯುತ್ತದೆ. (ಶಾಸ್ತ್ರವು what should be ಎಂಬುದನ್ನು ತಿಳಿಸುತ್ತದೆ. ನಮ್ಮ ನಿಜವಾದ - ಪಾರದರ್ಶಕ ಜೀವನ "what is" ಎಂಬುದನ್ನು ತಿಳಿಸುತ್ತದೆ.) ಆ ಮಧ್ಯಂತರದಲ್ಲಿ ಬಹಳ GAP ಇದೆ. ಈ GAP ತುಂಬಿದಾಗಲೇ ನಾವು ಭಗವಂತನನ್ನು ಕಾಣಬಹುದು.

ಭಗವಂತನನ್ನು ಕಾಣದ ಹೊರತು ನಿಜವಾದ ಸುಖವಿಲ್ಲ. ಅದಕ್ಕಾಗಿ ಅವನ ಅರಿವು ಅಗತ್ಯ. ಅರಿವಿಗಾಗಿ ಅವನ ಬಗೆಗಿನ ಶಾಸ್ತ್ರದ ತಿಳುವಳಿಕೆ ಹಾಗೂ ಅದರ ಪ್ರಕಾರ ನಮ್ಮ ಪಾರದರ್ಶಕ (Transparent) ನಡೆ ಆರಂಭಿಸಿದಾಗಲೇ ಅಧ್ಯಾತ್ಮಿಕ ಜೀವನ ಆರಂಭವಾದೀತು ! ಈ ನಡೆ ನುಡಿಗಳ ಜ್ಞಾನಕ್ಕಾಗಿ ನಮ್ಮ ಮನ ಮಿಡಿಯಬೇಕು. ನುಡಿಯಂತೆ ನಡೆಗಾಗಿ ಪ್ರಾಮಾಣಿಕ ಪ್ರಯತ್ನ ಪ್ರಾರಂಭಿಸಬೇಕು.

**"ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್" (ಅನುವ್ಯಾಖ್ಯಾನ)**

ಭಗವಂತನ ಜ್ಞಾನ ನೀಡುವ ವೇದ, ಇತಿಹಾಸ (ಮಹಾಭಾರತ, ರಾಮಾಯಣ,) ಪುರಾಣಗಳ ಶ್ರವಣ, ಶ್ರೀಮಧ್ವಾಚಾರ್ಯರ ಗ್ರಂಥಗಳ ಶ್ರವಣ ಜೀವನದ ಪ್ರತಿಕ್ಷಣದ ಗುರಿಯಾಗಿರಬೇಕು. ಇದೇ what should be. ಆದರೆ ನಮ್ಮ ಯಾಂತ್ರಿಕ ಜೀವನದಲ್ಲಿ ನಾವು ಭಗವಂತನ ಅರಿವಿಗಾಗಿ ಎಷ್ಟು ಕ್ಷಣ

ಹಾಕುತ್ತಿದ್ದೇವೆ. ಹಾಕಿದ ಕ್ಷಣಗಳು ಎಷ್ಟರ ಮಟ್ಟಿಗೆ ಸಾರ್ಥಕ ಎಂಬುದು ಕೂಡಾ ನಮ್ಮ ಮನಶ್ಚಾಂಚಲ್ಯ ಗಮನಿಸಿದಾಗ - ಪ್ರಶ್ನಾರ್ಹವಾಗಿಯೇ ಇದೆ, ಎಂದು ತಿಳಿಯದಿರದು. ಇದೇ what is.

ಈ ಹಿನ್ನೆಲೆಯಲ್ಲಿ ನಮ್ಮ ಅಧ್ಯಾತ್ಮಿಕ ಬದುಕನ್ನು ಆರಂಭಿಸಲು ಮೊದಲ ಹೆಜ್ಜೆಯನ್ನಿಡಲು ಅತ್ಯವಶ್ಯವಾದ ಕೆಲವು ಪ್ರಾತಿನಿಧಿಕ ಸ್ತೋತ್ರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಯದ್ಯಪಿ ಇಂತಹ ನೂರಾರು ಕೃತಿಗಳು ಈಗಾಗಲೇ ಜನಮನದಲ್ಲಿ ಬೆರೆತಿವೆ. ಇದೂ ಕೂಡಾ ಅಂತಹ ಒಂದು ಪ್ರಯತ್ನವೇ ಹೊರತು ಇದೇ ಅಂತಿಮ ಪ್ರಥಮ ಹೆಜ್ಜೆಯಲ್ಲ. ಆ ದಿಶೆಯಲ್ಲಿ ಇದೊಂದು ಪ್ರಾಂಜಲ ಪ್ರಯತ್ನ.

ನಮ್ಮ ಅಧ್ಯಾತ್ಮಿಕ ಜೀವನ ಬೆಳಗಿನ ಜಾವವೇ ಆರಂಭಿಸಬೇಕು. ಅದು ಹರಿವಾಯು ಗುರುಗಳ ಸ್ಮರಣೆಯಿಂದಲೇ. ನಂತರ ಬಾಹ್ಯ ದೈಹಿಕ ಶೌಚ, ಸ್ನಾನ ಸಂಧ್ಯಾವಂದನ - ದೇವಪೂಜೆ - ನೈವೇದ್ಯ - ವೈಶ್ಯದೇವ - ಗುರುಗಳಿಗೆ ಹಸ್ತೋದಕ ದಾನಗಳು.

ಇಲ್ಲಿ ಕೊಟ್ಟಿರುವ ಸ್ತೋತ್ರಗಳ ಪಠಣೆ - ದಿನಕ್ಕೆ ಒಮ್ಮೆಯಾದರೂ ಆದಲ್ಲಿ ನಮ್ಮ ಜೀವನ ಹಸನಾದೀತು. ಇದು ಮುಂದುವರಿದಲ್ಲಿ ನಮ್ಮಯಾಂತ್ರಿಕ ಜಡ ಜೀವನದಲ್ಲಿಯೂ ಬ್ರಹ್ಮಜ್ಞಾನ ಪಡೆಯಲು - ಬೇಕಾದ ಶಾಸ್ತ್ರಧ್ಯಯನ ಆರಂಭಮಾಡಲು ಹರಿವಾಯುಗಳು ಅನುಗ್ರಹಿಸುವರು ಎಂದು ನನ್ನ ಬಲವಾದ ನಂಬಿಕೆ. ಈ ಧಾರ್ಮಿಕ ಚಟುವಟಿಕೆಗಳೊಡನೆ ಅತ್ಯಂತ ಅವಶ್ಯವಾದ, ಕಡ್ಡಾಯವಾದ ಏಕಾದಶ್ಯುಪವಾಸದಂತಹ ದೈಹಿಕ ಮಾನಸಿಕ ಶುಚಿತ್ವ ನೀಡಿ ನಮ್ಮ ಹಿಂದಿನ ಸಕಲ ಪಾಪಗಳನ್ನು ನಾಶ ಮಾಡುವ ವ್ರತಾಚರಣೆ ನಮ್ಮನ್ನು ಇನ್ನಷ್ಟು ಮೇಲೆ ಎತ್ತುವುದರಲ್ಲಿ ಸಂಶಯವಿಲ್ಲ.

ಹೀಗೆ ಸದಾಚಾರ, ಸದ್ವಿಚಾರಗಳೆಂಬ ಜೀವನದ ಎರಡು ಮಜಲುಗಳನ್ನು ಪ್ರಾಮಾಣಿಕವಾಗಿ ನಾವು ನಡೆಸಿದಲ್ಲಿ ನಮ್ಮ ಆಧ್ಯಾತ್ಮಿಕ ಜೀವನದ ಮೊದಲ ಮೆಟ್ಟಲನ್ನು ಹತ್ತುವ ಪ್ರಯತ್ನವಾಗಿ ಮುಂದೆ ಈ ''ಮೆಟ್ಟಲೋತ್ಸವ'' ವೈಕುಂಠಪತಿ ಶ್ರೀನಿವಾಸನ ದರ್ಶನಕ್ಕೆ ಮುಂದೆ ಖಂಡಿತವಾಗಿ ಕಾರಣವಾಗುತ್ತದೆ, ಎಂದು ಹೇಳಬಹುದು.

ಇಂತಹ ಹರಿವಾಯು ಗುರುಗಳ ಸ್ಮರಣೆ ಮಾಡಲು - ಮಾಡಿಸಲು ಇಲ್ಲಿಯ ಪ್ರಯತ್ನಕ್ಕೆ ಪ್ರಚೋದನೆ ನೀಡಿದವರು ಶ್ರೀ ಆರ್.ಕೆ. ಶಿವರಾಮ. ಅವರು ತಮ್ಮ

ತಂದೆ ದಿ ॥ ಆರ್.ಜಿ. ಕೃಷ್ಣಮೂರ್ತಿಯವರ ನೆನಪಿಗಾಗಿ ಇದನ್ನು ನನ್ನಿಂದ ಮಾಡಿಸಿದ್ದಾರೆ. ಶ್ರೀ ಶಿವರಾಮ ಅವರಿಗೆ ನನ್ನ ಅನೇಕ ಕೃತಜ್ಞತೆಗಳು.

ಅವರ ತಂದೆಯವರಿಗೆ ಶ್ರೀ ಹರಿವಾಯುಗಳು ಸದ್ಗತಿಯನ್ನೂ ಆರ್.ಕೆ. ಶಿವರಾಮ ಅವರ ಕುಟುಂಬದ ಎಲ್ಲ ಸದಸ್ಯರಿಗೆ ಭಾರತೀಪತಿ - ಪತಿಯು ಜ್ಞಾನ ಭಕ್ತಿ ವೈರಾಗ್ಯಗಳನ್ನೂ, ಕೌಟುಂಬಿಕ ಸಕಲ ಸೌಖ್ಯಗಳನ್ನು ದಯಪಾಲಿಸಲಿ. ಓದುಗರು ಆಧ್ಯಾತ್ಮಿಕ ಜೀವನವನ್ನು ಆರಂಭಿಸಲು ಈ ಕೃತಿಯು ನೆರವಾದಲ್ಲಿ ಈ ಶ್ರಮ ಸಾರ್ಥಕವೆಂದು ನಂಬಿ ಈ ಪುಟ್ಟ ಸಂಕಲವನ್ನು ಪರಮಪೂಜ್ಯ ಶ್ರೀ ರಘೂತ್ತಮ ತೀರ್ಥರ ಅಂತರ್ಯಾಮಿ ಭಾರತೀಪತಿಯ ಅಂತರ್ಯಾಮಿಯಾದ ಶ್ರೀ ಲಕ್ಷ್ಮೀ ನೃಸಿಂಹ ದೇವರಲ್ಲಿ ಸಮರ್ಪಿಸುತ್ತೇನೆ.

ಈ ಕೃತಿಗೆ ಅನುಗ್ರಹ ಸಂದೇಶ ನೀಡಿರುವ ಶ್ರೀ ಭಂಡಾರಕೇರಿ ಮಠದ **ಶ್ರೀ ೧೦೮ ಶ್ರೀ ವಿದ್ಯೇಶತೀರ್ಥ ಶ್ರೀಪಾದರಿಗೆ** ನನ್ನ ಅನಂತ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇನೆ.

ಮುಖ್ಯವಾಗಿ ರಕ್ಷಾಪುಟವನ್ನು ಉತ್ತಮವಾಗಿ ವಿನ್ಯಾಸಗೊಳಿಸಿ ಪುಸ್ತಕದ ಅಂದವನ್ನು ಹೆಚ್ಚಿಸಿದ ಶ್ರೀ ಕೆ.ಎಂ. ಶೇಷಗಿರಿಯವರಿಗೆ ವಂದನೆಗಳು.

ಇದನ್ನು ಅಂದವಾಗಿ ಮುದ್ರಿಸಿದ ''ವಾಗರ್ಥ'' ಪ್ರಿಂಟರ್ಸ್ ಇವರಿಗೆ ನನ್ನ ಅನೇಕ ಧನ್ಯವಾದಗಳು.

ಪಾರ್ಥಿವ ಸಂವತ್ಸರ
ಪುಷ್ಯ ಶುದ್ಧ ದ್ವಾದಶೀ
11-1-2006

**ವೇದಗರ್ಭ. ಜಿ. ಶೇಷಗಿರಿರಾವ್**

## ಬೆಳಗಿನ ಜಾವದಲ್ಲಿ ಸ್ಮರಣೆ

ಮಂಗಲ ಮೂರ್ತಿ ಭಗವಂತನನ್ನು ನಮ್ಮ ಮಂಗಲಕ್ಕಾಗಿ ಸ್ಮರಿಸುವುದು.

ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥

(ಈ ರೀತಿಯಾಗಿ ಹದಿನಾರು ಬಾರಿ ಉಚ್ಚರಿಸುವುದು).

''ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ ।
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು ॥''

''ಮಂಗಲಂ ಭಗವಾನ್ ವಿಷ್ಣುಃ ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥''

ಬೆಳಗಿನಿಂದ ರಾತ್ರಿಯವರೆಗಿನ ನಮ್ಮ ಎಲ್ಲ ಕಾರ್ಯಗಳು ವಿಷ್ಣುವಿನ ಆರಾಧನೆ ಗೋಸುಗ ವೆಂದು ಅನುಸಂಧಾನ ಮಾಡುವುದು.

''ಪ್ರಾತಃ ಕಾಲಾದಿಕಂ ಕರ್ಮ ನಿತ್ಯನೈಮಿತ್ತಿಕಂ ತಥಾ ।
ವಿಷ್ಣೋರಾಧಾನಾರ್ಥಾಯ ಕರಿಷ್ಯೇಽಹಂ ತವಾಜ್ಞಯಾ ॥''

ಸಂಸಾರವೆಂಬ ಕೆಸರಿನ ಸಮುದ್ರದಲ್ಲಿ ಮುಳುಗಿದ ಜೀವರನ್ನು ಎತ್ತಲು ಕೃಷ್ಣ ಕರಾವಲಂಬನಕ್ಕಾಗಿ ಯಾಚನೆ -

''ಕರಾವಲಂಬನಂ ದೇಹಿ ಶ್ರೀಕೃಷ್ಣ ಕಮಲೇಕ್ಷಣ ।
ಭವ ಪಂಕಾರ್ಣವೇ ಘೋರೇ ಮಜ್ಜತೋ ಮಮ ಶಾಶ್ವತ ।''

ವಿಧಾತೃ ದೇವತೆಗಳೆಲ್ಲ - ವಿಷ್ಣುವಿನ ಹಿಂದೆ - ಸಂಕ್ಷಿಪ್ತ ತಾರತಮ್ಯ ಸ್ತೋತ್ರ

''ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ।
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಂ ।

ದೇವೀರ್ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ
ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾನ್ ತದ್ಗುರೂನ್ಮದ್ಗುರೂಂಶ್ಚ'' ॥

ಸರ್ವೋತ್ತಮ ವಿಷ್ಣು, ಆತನ ಪತ್ನಿ ಶ್ರೀ ಭೂ ದುರ್ಗಾತ್ಮಕಳಾದ ಲಕ್ಷ್ಮೀ; ಬ್ರಹ್ಮ ವಾಯುಗಳು; ಅವರ ಪತ್ನಿಯರಾದ ಗಾಯತ್ರೀ (ಸರಸ್ವತೀ), ಭಾರತೀದೇವಿ;

ಗರುಡ, ಶೇಷ, ರುದ್ರರು - ಅವರ ಪತ್ನಿಯರಾದ ಸುಪರ್ಣೀ, ವಾರುಣೀ, ಪಾರ್ವತೀ, ಇಂದ್ರ, ಕಾಮ ಮೊದಲಾದ ಎಲ್ಲ ದೇವತೆಗಳು, ಅವರ ಗುರುಗಳು ಹಾಗೂ ನಮ್ಮ ಗುರುಗಳನ್ನು ವಂದಿಸುತ್ತೇನೆ.

**''ಸರ್ವೋತ್ತಮೋ ವಿಷ್ಣುರಥೋ ರಮಾ ಚ**
**ಬ್ರಹ್ಮಾ ಚ ವಾಯುಶ್ಚ ತದೀಯ ಪತ್ನ್ಯೌ ।**
**ಅನ್ಯೇ ಚ ದೇವಾಃ ಸತತಂ ಪ್ರಸನ್ನಾಃ**
**ಹರೌ ಸುಭಕ್ತಿಂ ಮಯಿ ಸಂದಿಶಂತು ॥''**

ವಿಷ್ಣು; ರಮಾ; ಬ್ರಹ್ಮ, ವಾಯು - ಅವರ ಪತ್ನಿಯರು; ಇತರ ಎಲ್ಲದೇವತೆಗಳು ನನ್ನ ಮೇಲೆ ಪ್ರಸನ್ನರಾಗಿ ಹರಿಭಕ್ತಿಯನ್ನು ಅನುಗ್ರಹಿಸಲಿ.

**''ನಮೋ ವಸ್ತಾತ್ತ್ವಿಕಾ ದೇವಾ ವಿಷ್ಣು ಭಕ್ತಿ ಪರಾಯಣಾಃ ।**
**ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ॥''**

ವಿಷ್ಣು ಭಕ್ತಿ ಪರಾಯಣರಾದ ತಾತ್ವಿಕ ದೇವತೆಗಳಾದ ನೀವು ನಮ್ಮನ್ನು ಧರ್ಮಮಾರ್ಗದಲ್ಲಿ ಪ್ರೇರಣೆ ಮಾಡಿರಿ

**ಶ್ರೀಮದಾಚಾರ್ಯರ ಮತಾನುಗ ।**
**ಧೀಮತಾಂ ವರರಂಘ್ರಿ ಕಮಲಕೆ ।**
**ಸೋಮಪಾನಾರ್ಹರಿಗೆ ತಾತ್ವಿಕ ದೇವತಾಗಣಕೆ ॥**

**ಹೈಮವತಿ ಷಣ್ಮಹಿಷಿಯರಡಿಗೆ ।**
**ವ್ಯೋಮಕೇಶಗೆ ವಾಣಿ ವಾಯು ಸು ।**
**ತಾಮರಸಭವ ಲಕುಮೀ ನಾರಾಯಣರಿಗಾನಮಿಪೆ ॥**

(ಹರಿಕಥಾಮೃತಸಾರ ಸಂಧಿ 27 - 1)

ಇದು ಒಂದು ಶ್ಲೋಕದಲ್ಲಿ ದೇವತಾ ತಾರತಮ್ಯ ನಿರೂಪಿಸುತ್ತದೆ.

ಗಜೇಂದ್ರ ಮೋಚಕ - ಹರಿಸ್ಮರಣೆ

**''ಅಂತಃಸರಸ್ಯುರುಬಲೇನ ಪದೇ ಗೃಹೀತೋ**
**ಗ್ರಾಹೇಣ ಯೂಥಪತಿರಂಬುಜಹಸ್ತ ಆರ್ತಃ ।**
**ಆಹೇದಮಾದಿಪುರುಷಾಖಿಲಲೋಕನಾಥ**
**ತೀರ್ಥಶ್ರವಃ ಶ್ರವಣಮಂಗಲ ನಾಮಧೇಯ'' ॥**

"ಸ್ಮೃತ್ವಾ ಹರಿಸ್ತಮರಣಾರ್ಥಿನಮಪ್ರಮೇಯಃ
ಚಕ್ರಾಯುಧಃ ಪತಗರಾಜಭುಜಾಧಿರೂಢಃ ।
ಚಕ್ರೇಣ ನಕ್ರವದನಂ ವಿನಿಪಾಟ್ಯ ತಸ್ಮಾ
ದ್ಧಸ್ತೇ ಪ್ರಗೃಹ್ಯ ಭಗವಾನ್ ಕೃಪಯೋಜ್ಜಹಾರ" ॥

ಭಾಗವತ ಸ್ಕಂಧ ॥ ಅ - 7 - 15, 16.

ಗಜೇಂದ್ರನು ಸರೋವರದ ಒಳಗೆ ಇಳಿದಾಗ ಅಲ್ಲಿದ್ದ ಭಾರಿ ಬಲವುಳ್ಳ ಮೊಸಳೆಯಿಂದ ಹಿಡಿಯಲ್ಪಟ್ಟನು. ಆಗ ಗಜೇಂದ್ರನು ದುಃಖಿತನಾಗಿ ಕೈಯಲ್ಲಿ (ಸೊಂಡಲಿನಲ್ಲಿ), ಕಮಲಪುಷ್ಪವನ್ನು ಹಿಡಿದುಕೊಂಡು "ಎಲ್ಲ ಲೋಕಗಳಿಗೂ ಒಡೆಯನೇ ! ಶ್ರವಣಮಾತ್ರದಿಂದ ಮಂಗಳಕರನೇ ! ನನ್ನನ್ನು ಕಾಪಾಡೆಂದನು. ಆಗ ಪೂಜ್ಯನಾದ ತಾಪಸ ನಾಮಕ ಹರಿಯು ಗರುಡಾರೂಢನಾಗಿ, ಚಕ್ರಾಯುಧ ದಿಂದ ಮೊಸಳೆಯ ಬಾಯಿಯನ್ನು ಸೀಳಿ ಕೃಪೆಯಿಂದ ಗಜರಾಜನನ್ನು ಸರೋವರದಿಂದ ಮೇಲಕ್ಕೆ ಎತ್ತಿದನು."

ನಾವೂ ಸಂಸಾರವೆಂಬ ಕೊಳದಲ್ಲಿ ಕಾಮ ಕ್ರೋಧಾದಿಗಳೆಂಬ ಮೊಸಳೆಗಳಿಂದ ಹಿಡಿಯಲ್ಪಟ್ಟಿದ್ದೇವೆ. ಇಂತಹ ನಾವು "ನಾರಾಯಣಾಖಿಲಗುರೋ ಭಗವನ್ ನಮಸ್ತೇ" ಎಂದ ಗಜರಾಜನಂತೆ ಭಕ್ತಿಯಿಂದ ಕೂಗಿದಲ್ಲಿ ನಾರಾಯಣನು ನಮ್ಮನ್ನು ಕಾಪಾಡುತ್ತಾನೆ."

**ಸಂಧ್ಯಾವಂದನೆ - ದೇವಪೂಜೆ ನಂತರ ಪಾರಾಯಣ ಮಾಡುವುದು - ರಾತ್ರಿ ಕೂಡಾ ಪಾರಾಯಣ ಮಾಡುವುದು.**

## ಏಕಶ್ಲೋಕಿ ಮಹಾಭಾರತ - ಒಂದೇ ಶ್ಲೋಕದ ಮಹಾಭಾರತ

"ಆದೌ ಪಾಂಡವಧಾರ್ತರಾಷ್ಟ್ರಜನನಂ ಲಾಕ್ಷಾಗೃಹೇ ದಾಹನಂ ।
ದ್ಯೂತೇ ಶ್ರೀಹರಣಂ ವನೇ ವಿಹರಣಂ ಮತ್ಸ್ಯಾಲಯೇ ವರ್ಧನಂ ॥

ಲೀಲಾಗೋಗ್ರಹಣಂ ರಣೇ ವಿತರಣಂ ಸಂಧಿಕ್ರಿಯೋಜ್ಜೃಂಭಣಂ ।
ಭೀಷ್ಮದ್ರೋಣಸುಯೋಧನಾದಿಮಥನಂ ಹ್ಯೇತನ್ಮಹಾಭಾರತಮ್" ।

ಮೊದಲು ಪಾಂಡವ, ದುರ್ಯೋಧನಾದಿಗಳ ಜನನ, ಅರಗಿನ ಮನೆಯಲ್ಲಿ ಪಾಂಡವರನ್ನು ದಹಿಸಲು ಪ್ರಯತ್ನ, ಮೋಸದ ಪಗಡೆಯಾಟದಲ್ಲಿ ಪಾಂಡವರ ಸಂಪತ್ತಿನ ಅಪಹರಣ, ಪಾಂಡವರಿಂದ ವನದಲ್ಲಿಯೂ ವಿಹಾರ ಮಾಡಿದ್ದು (ವನವಾಸ); ವಿರಾಟರಾಜನ ಅರಮನೆಯಲ್ಲಿ ಅಜ್ಞಾತ ವಾಸರೂಪವಾಗಿಯೂ

ವೃದ್ಧಿಹೊಂದಿದ್ದು; ಅನಾಯಾಸವಾಗಿ ಕೌರವರಿಂದ ಅಪಹೃತವಾದ ಗೋವುಗಳನ್ನು ಬಿಡಿಸಿದ್ದು; (ಪಾಂಡವರಿಗೆ ರಾಜ್ಯ ಕೊಡಿಸಲು) ಕೃಷ್ಣನಿಂದ ಸಂಧಿ ಪ್ರಯತ್ನ- ತನ್ನ ವಿರಾಡ್ರೂಪ ಪ್ರದರ್ಶನ; ಭೀಷ್ಮದ್ರೋಣ, ದುರ್ಯೋಧನಾದಿಗಳ ಸಂಹಾರ - (ಪಾಂಡವರಿಗೆ ರಾಜ್ಯಲಾಭ) - **ಇದುವೇ ಮಹಾಭಾರತವು;**

## ಏಕಶ್ಲೋಕೀ ರಾಮಾಯಣ (ಒಂದೇ ಶ್ಲೋಕದ ರಾಮಾಯಣ)

**"ಪೂರ್ವಂ ರಾಮತಪೋವನಾಭಿಗಮನಂ ಹತ್ವಾ ಮೃಗಂ ಕಾಂಚನಂ ।**
**ವೈದೇಹೀಹರಣಂ ಜಟಾಯುಮರಣಂ ಸುಗ್ರೀವ ಸಂಭಾಷಣಂ ॥**

**ವಾಲೀ ನಿಗ್ರಹಣಂ ಸಮುದ್ರತರಣಂ ಲಂಕಾಪುರೀದಾಹನಂ ।**
**ಪಶ್ಚಾದ್ರಾವಣಕುಂಭಕರ್ಣಮಥನಂ ಹ್ಯೇತದ್ಧಿ ರಾಮಾಯಣಂ" ॥**

ಮೊದಲು ರಾಮಾದಿಗಳ; (ಕಪಿಗಳ ರೂಪದ ದೇವತೆಗಳ ಅವತಾರ - ಪಿತೃವಾಕ್ಯಪರಿಪಾಲನೆಗಾಗಿ); ತಪಸ್ವಿಗಳ ರಕ್ಷೆಗಾಗಿ ವನಕ್ಕೆ ಪ್ರಯಾಣ; (ಮಾಯಾವಿಯಾದ) ಬಂಗಾರದ ಜಿಂಕೆ ರೂಪ ತಳೆದ ಮಾರೀಚನನ್ನು ಸಂಹರಿಸಿ, (ಸಂಹಾರ); (ರಾವಣನಿಂದ) ಸೀತಾ (ಕೃತಿ) ಅಪಹರಣ; (ರಾವಣನೊಡನೆ ಸೆಣಸಿದ) ಜಟಾಯು ಪಕ್ಷಿಯ ಸಾವು; (ಹನುಮಂತನ ಮೂಲಕ ಸಖ್ಯ ಪಡೆದ) ಸುಗ್ರೀವನೊಂದಿಗೆ (ರಾಮನ) ಮಾತುಕತೆ; (ರಾಮನಿಂದ) ವಾಲಿಯ ಸಂಹಾರ; (ಹನುಮಂತನಿಂದ ಸೀತಾನ್ವೇಷಣೆಗಾಗಿ ದಕ್ಷಿಣ) ಸಮುದ್ರ ದಾಟುವಿಕೆ; (ರಾವಣನ ರಾಕ್ಷಸ ಸೈನ್ಯನಾಶ - ಅಕ್ಷಕುಮಾರ ಸಂಹಾರ) (ತನ್ನ ಬಾಲದ ಬೆಂಕಿಯಿಂದ) ಲಂಕಾ ಪಟ್ಟಣದ ದಹನ; ನಂತರ ರಾವಣ ಕುಂಭಕರ್ಣಾದಿ ಸರ್ವ ರಾಕ್ಷಸ ) ಸಂಹಾರ; (ವಿಭೀಷಣನಿಗೆ ಪಟ್ಟ) **ಇದುವೇ ರಾಮಾಯಣ**

## ಒಂದೇ ಶ್ಲೋಕದ ಭಾಗವತ. ಏಕಶ್ಲೋಕೀ ಭಾಗವತ

**(ಸಕಲ ಶಾಸ್ತ್ರಸಾರ)**
**(ಭಾಗವತದ ಆದಿಮ ಮಂಗಳಶ್ಲೋಕ)**

**ಓಂ ॥ ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್**
**ತೇನೇ ಬ್ರಹ್ಮಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ॥**

**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽಮೃಷಾ**
**ಧಾಮ್ನಾ ಸ್ವೇನ ಸದಾ ನಿರಸ್ತ ಕುಹಕಂ ಸತ್ಯಂ ಪರಂ ಧೀಮಹಿ ॥**

ಉಪಕ್ರಮ, ಉಪಸಂಹಾರ ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ ಮತ್ತು ಉಪಪತ್ತಿ ಎಂಬ ತಾತ್ಪರ್ಯ ಲಿಂಗಗಳಿಂದ ಕೂಡಿದ ಶೃತಿ - ಸ್ಮೃತಿಗಳ ತಾತ್ಪರ್ಯ ಪರ್ಯಾಲೋಚನೆಯನ್ನು ಮಾಡಲು, ಚೇತನಾಚೇತನಾತ್ಮಕ ಜಗತ್ತಿನ ಸೃಷ್ಟ್ಯಾದಿಗಳು ಯಾರಿಂದ ಆಗುತ್ತವಯೋ, ಯಾವನು ಸಕಲ ಪದಾರ್ಥಗಳನ್ನೂ ತಿಳಿದು ಸರ್ವಜ್ಞನಾಗಿದ್ದಾನೆಯೋ, (ಸ್ವಾಭಾವಿಕವಾಗಿ) ಸರ್ವತಂತ್ರಸ್ವತಂತ್ರ ನಾಗಿರುವನೋ, ಚತುರ್ಮುಖಬ್ರಹ್ಮ ದೇವರಿಗೆ ಪದ್ಮ ಸೃಷ್ಟಿ ಕಾಲದಲ್ಲಿ ವೇದಗಳನ್ನು ಹಾರ್ದಿಕವಾಗಿ - ಅನುಗ್ರಹ ಪೂರ್ವಕವಾಗಿ ವಿಸ್ತರಿಸಿದನೋ (ವೇದಗಳ ನಿಜವಾದ ಅಭಿಪ್ರಾಯವನ್ನು ಉಪದೇಶಿಸಿದನೋ), ಯಾರಿಂದ ಆಗುವ ಸ್ವಾವತಾರ (ತೇಜೋರೂಪ) ಸೃಷ್ಟಿ, ಜೀವ (ನೀರಿನಲ್ಲಿ ಕಾಣುವ ಪ್ರತಿಬಿಂಬದಂತೆ) ಸೃಷ್ಟಿ, ಜಡಸೃಷ್ಟಿ (ಪ್ರಕೃತಿಯನ್ನು ಉಪಾದಾನ ಕಾರಣವಾಗಿಸಿ ಮಾಡುವ)ಗಳು ಯಾರಿಗೆ ಯಾವ ಪ್ರಯೋಜನವೂ ಆಗಿಲ್ಲವೋ, ಯಾವ ಸ್ವಪ್ರಕಾಶಪೂರ್ಣನನ್ನು ಅಜ್ಞಾನಾದಿಗಳು ಸಮೀಪಿಸುವುದಿಲ್ಲವೋ (ಯಾವನು ನಿರ್ದೋಷನೋ) ಅಂತಹ ಸರ್ವಗುಣಪೂರ್ಣನೂ, ದೋಷದೂರನೂ. ನಿತ್ಯನೂ, ದುಃಖರಹಿತನೂ, ಆನಂದಪೂರ್ಣನಾದ ವಿಷ್ಣುವನ್ನು ಧ್ಯಾನ ಮಾಡೋಣ.

ಅಂತೂ ಇಲ್ಲಿ ಬ್ರಹ್ಮಸೂತ್ರೋಕ್ತ ಭಗವಂತನ ಲಕ್ಷಣವೂ, (ಜಗತ್ ಸೃಷ್ಟ್ಯಾದಿ ಕರ್ತೃತ್ವ ರೂಪ,) ಸ್ವಾತಂತ್ರ್ಯ, ಆನಂದಪೂರ್ಣತ್ವ, ದುಃಖಾದಿ ದೋಷದೂರತ್ವವೂ, ಸೃಷ್ಟಿಯ ವ್ಯಾಪಾರವು ಜೀವರಿಗೆ ಪ್ರಯೋಜನವೇ ಹೊರತು, ಆತನಿಗೆ ಇಲ್ಲವೆಂಬ ಮುಂತಾದ ಪ್ರಮೇಯಗಳು ನಿರೂಪಿತವಾಗಿವೆ,

**''ಆದೌ ದೇವಕಿದೇವಿಗರ್ಭಜನನಂ ಗೋಪೀಗೃಹೇ ವರ್ಧನಂ ।**
**ಮಾಯಾಪೂತನಿಜೀವಿತಾಪಹರಣಂ ಗೋವರ್ಧನೋದ್ಧಾರಣಂ ॥**

**ಕಂಸಚ್ಛೇದನಕೌರವಾದಿಹರಣಂ ಕುಂತೀಜಸತ್ಪಾಲನಂ ।**
**ಹ್ಯೇತದ್ಭಾಗವತಂ ಪುರಾಣಮಖಿಲಂ ಶ್ರೀಕೃಷ್ಣಲೀಲಾಮೃತಂ'' ॥**

ಮೊದಲು ದೇವಕೀದೇವಿಯ ಗರ್ಭದಲ್ಲಿ ಕೃಷ್ಣಾವತಾರ; (ಯಶೋದೆಯ) ಗೋಪಿಯ ಮನೆಯಲ್ಲಿ ಬೆಳೆದುದು; ಮಾಯಾಪೂತನಿಯ ಪ್ರಾಣಹರಣ; (ಇಂದ್ರಗರ್ವಭಂಗ ಮಾಡಿ) ಗೋವರ್ಧನ ಪರ್ವತವನ್ನು ಎತ್ತಿದುದು (ಗೋಕುಲದ ಗೋವು, ಗೋಪಾಲಕರನ್ನು ರಕ್ಷಿಸಿದ್ದು); ಕಂಸ ಸಂಹಾರ, (ದುರ್ಯೋಧನಾದಿ) ಕೌರವರ ಸಂಹಾರ; ಕುಂತೀ ಮಕ್ಕಳಾದ

ಧರ್ಮರಾಜಾದಿಗಳ ರಕ್ಷಣೆ (ರಾಜ್ಯದಲ್ಲಿ ಮತ್ತೆ ಕೂಡಿಸಿ); ಇದುವೇ ಶ್ರೀಕೃಷ್ಣ ಲೀಲೆಗಳೆಂಬ ಅಮೃತ, ಎಲ್ಲ ಪುರಾಣಗಳ ಸಾರರೂಪವಾದ ಭಾಗವತವು.

## ಚತುಃಶ್ಲೋಕೀ ಭಾಗವತ (ನಾಲ್ಕು ಶ್ಲೋಕಗಳ ಭಾಗವತ)

ಶ್ರೀಭಗವಾನುವಾಚ :- (ಬ್ರಹ್ಮಾಣಂ ಪ್ರತಿ)

ಬ್ರಹ್ಮದೇವರಿಗೆ ಶ್ರೀ ನಾರಾಯಣನ ಉಪದೇಶ

**ಜ್ಞಾನಂ ಪರಮಗುಹ್ಯಂ ಮೇ ಯದ್ವಿಜ್ಞಾನಸಮನ್ವಿತಂ ।**
**ಸರಹಸ್ಯಂ ತದಂಗಂ ಚ ಗೃಹಾಣ ಗದಿತಂ ಮಯಾ ॥**

ಮೋಕ್ಷವನ್ನು ಖಚಿತವಾಗಿ ಕೊಡಿಸುವ, ನನ್ನ ವಿಶೇಷಜ್ಞಾನದಿಂದ ಸಹಿತವಾದ ನಿನ್ನ ಬಿಂಬರೂಪನಾದ ಉಪನಿಷತ್ಸಂವಾದವಿರುವ (ಉಪನಿಷತ್ತಿನಲ್ಲಿಯೂ ಉಕ್ತವಾದ), ಅತ್ಯಂತ ಗೋಪ್ಯವಾದ, ನನ್ನ ಜ್ಞಾನ ಮತ್ತು ಅದರ ಸಾಧನವನ್ನು ನಿನಗೆ ಹೇಳುತ್ತೇನೆ. ಅದನ್ನು ತಿಳಿದುಕೊ.

**ಅಹಮೇವಾಸಮಗ್ರೇ ಚ ನಾನ್ಯದ್ಯತ್ಸದಸತ್ಪರಂ ।**
**ಪಶ್ಚಾದಹಂ ತ್ವಮೇತಚ್ಚ ಯೋಽವಶಿಷ್ಯೇತ ಸೋಽಸ್ಮ್ಯಹಂ ॥**

ಸೃಷ್ಟಿಗಿಂತ ಮೊದಲು ನಾನೊಬ್ಬನೇ ಸರ್ವಸ್ವತಂತ್ರನಾಗಿದ್ದೆನು. ಸತ್, ಅಸತ್ ಪದಾರ್ಥಗಳು (ಪ್ರಕೃತಿ ಕಾಲ ಆಕಾಶ ಜೀವರು) ಆಗ ಇದ್ದರೂ ಅಸ್ವತಂತ್ರರಾಗಿಯೇ ನನ್ನ ಅಧೀನರಾಗಿಯೇ ಇದ್ದರು. ಪ್ರಲಯದಲ್ಲಿಯೂ ಇವೆಲ್ಲ ಅಸ್ವತಂತ್ರವಾಗಿಯೇ ಇದ್ದವು. ಸೃಷ್ಟಿಯ ಅನಂತರ ಸ್ಥಿತಿಕಾಲದಲ್ಲಿ ನಾನು, ನೀನೂ ಜಗತ್ತೂ ಎಲ್ಲರೂ ಇದ್ದೆವು. ಆಗಲೂ ನಾನೇ ಸ್ವತಂತ್ರನು. ಸ್ಥಿತಿಕಾಲದಲ್ಲಿನ ಜೀವರ ಸ್ವಾತಂತ್ರ್ಯಜ್ಞಾನ ಕೇವಲ ಅಜ್ಞಾನಮೂಲವಾದುದು. ಆದ್ದರಿಂದ ನಾನೇ ಮೂರು ಕಾಲದಲ್ಲಿಯೂ ಸ್ವತಂತ್ರ. ನೀವೆಲ್ಲ ನನ್ನ ಅಧೀನರಾಗಿ ಇರುವವರು.

**ಋತೇಽರ್ಥಂ ಯತ್ಪ್ರತೀಯೇತ ನ ಪ್ರತೀಯೇತ ಚಾತ್ಮನಿ ।**
**ತದ್ವಿದ್ಯಾದಾತ್ಮನೋ ಮಾಯಾಂ ಯಥಾಽಭಾಸೋ ಯಥಾ ತಮಃ ॥**

ಆಪ್ತ ಕಾಮನಾದ ನನಗೆ ಪ್ರಕೃತಿ ಮೊದಲಾದ ಯಾವುದೇ ವಸ್ತುಗಳಿಂದ ಪ್ರಯೋಜನವಿಲ್ಲ, ಬಾಧೆಯೂ ಇಲ್ಲ. ನನಗೆ ಪ್ರತಿಬಿಂಬ ಭೂತನಾದ ಜೀವನೂ ಮೂಲಪ್ರಕೃತಿಯೂ ಮಾಯಾ ಎನಿಸುತ್ತವೆ.

ಛತ್ರ, ಚಾಮರಾದಿಗಳನ್ನು ಧರಿಸಿರುವ ಸೇವಕರು ರಥದಲ್ಲಿದ್ದರೂ ರಥಿಕರೆಂದು ಹೇಗೆ ಕರೆಯಲ್ಪಡುವುದಿಲ್ಲವೋ, ಹಾಗೆಯೇ ಜೀವ ಪ್ರಕೃತಿ ಕಾಲ ಕರ್ಮಾದಿಗಳು ಸದಾ ನನ್ನ ಅಧೀನಗಳಾಗಿದ್ದರೂ, ನನ್ನನ್ನು ಆಶ್ರಯಿಸಿ ಜೀವರಿಂದ ಶ್ರೀಹರಿಗೆ ಜೀವನ (ಆಶ್ರಯ) ವಾಗದಿರುವುದರಿಂದಲೂ, ಪ್ರಕೃತಿಯಿಂದ ಬಂಧನವಿಲ್ಲದಿರುವುದರಿಂದಲೂ, ಕರ್ಮದಿಂದ ಫಲವಾಗದಿರುವುದರಿಂದಲೂ ಕಾಲದಿಂದ ಪರಿಣಾಮವಾಗದಿರುವುದರಿಂದಲೂ, ಆಕಾಶಾದಿಗಳಿಂದ ಅವಕಾಶ ದಾನಾದಿಗಳು ಆಗದಿರುವುದರಿಂದಲೂ, ನನ್ನಲ್ಲಿ ಇರುತ್ತವೆ ಎಂದು ಹೇಳಲ್ಪಡುವುದಿಲ್ಲ.

**ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷು ಚ ।**
**ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಂ ॥**

ಪೃಥ್ವಿವ್ಯಾದಿ ಪಂಚಮಹಾಭೂತಗಳು ಅವುಗಳ ಕಾರ್ಯಗಳಾದ ಶರೀರಗಳಲ್ಲಿದ್ದರೂ ಅದಕ್ಕಿಂತ ಹೆಚ್ಚಾಗಿ ಶರೀರವಿಲ್ಲದಿರುವ ಕಡೆಗಳಲ್ಲಿಯೂ ಇರುವುದರಿಂದ ದೇಹಗಳಲ್ಲಿ ಇಲ್ಲವೆಂಬುದಾಗಿಯೂ ಹೇಗೆ ಹೇಳಲ್ಪಡುತ್ತವೆಯೋ ಹಾಗೆಯೇ ನಾನೂ ಕೂಡಾ ಅನಂತ ದೇಶ - ಕಾಲಗಳಲ್ಲಿ ವ್ಯಾಪ್ತನಾದ್ದರಿಂದ ಭೂತಪ್ರಕೃತ್ಯಾದಿಗಳಲ್ಲಿದ್ದರೂ ಇಲ್ಲದವನಂತೆ ಆಗಿರುತ್ತೇನೆ.

ಆದ್ದರಿಂದ ಪಂಚಭೂತಾದಿಗಳಲ್ಲಿದ್ದರೂ ಇಲ್ಲದವನೆಂದು ಹೇಳಲ್ಪಡುತ್ತೇನೆ. ಈ ಜ್ಞಾನ ಇರುವವನೇ ಯೋಗಿ.

**ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾಽಽತ್ಮನಃ ।**
**ಅನ್ವಯವ್ಯತಿರೇಕಾಭ್ಯಾಂ ಯತ್ಸ್ಯಾತ್ ಸರ್ವತ್ರ ಸರ್ವದಾ ॥**

ಪರಮಾತ್ಮನ ತತ್ವವನ್ನು ತಿಳಿಯಬಯಸುವವನು ಇದನ್ನೇ ತಿಳಿಯಬೇಕು. ಎಂದರೆ ನನ್ನ ಶಕ್ತಿ ಜ್ಞಾನಾದಿಗಳು ಸರ್ವ ದೇಶ ಕಾಲಗಳಲ್ಲಿ ಸಮಸ್ತ ವಸ್ತುಗಳನ್ನು ವಿಷಯೀಕರಿಸುತ್ತವೆಯೋ ಇಂತಹ ನನ್ನ ಅಸಾಧಾರಣ ಶಕ್ತ್ಯಾದಿಗಳನ್ನು ಚೆನ್ನಾಗಿ ತಿಳಿಯಬೇಕು. ಈ ಲಕ್ಷಣಗಳು ಇರದವನು ಪರಬ್ರಹ್ಮ ವಸ್ತುವಲ್ಲವೆಂದೂ (ವ್ಯತಿರೀಕವ್ಯಾಪ್ತಿ) ತಿಳಿಯಬೇಕು.

ಬ್ರಹ್ಮಜೀವರ ಲಕ್ಷಣಗಳನ್ನು ಪರಸ್ಪರ ವಿರುದ್ಧವೆಂದು ಇದರ ಅಭಿಪ್ರಾಯವಾಗಿದೆ.



''ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪೀನಂದನಃ ।
ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ'' ॥

ಈ ಶ್ಲೋಕದ ಪಠನೆಯಿಂದ ನಮ್ಮನ್ನು ಭಗವಂತನು ಸದಾ ಎಲ್ಲೆಡೆ ರಕ್ಷಿಸಲಿ ಎಂದು ಪ್ರಾರ್ಥಿಸಲಾಗಿದೆ. ಪ್ರಸಿದ್ಧ ಸುಧಾವ್ಯಾಖ್ಯಾನಕಾರರಾದ ಶ್ರೀಯಾದವಾರ್ಯರು ಈ ಶ್ಲೋಕವನ್ನು ಪಠಿಸುತ್ತಿದ್ದರಿಂದ ಭಗವಂತನು ನರಸಿಂಹ, ಕೃಷ್ಣ, ರಾಮಲಕ್ಷ್ಮಣ ರೂಪಗಳಿಂದ ಸದಾ ರಕ್ಷಿಸುತ್ತಿದ್ದನೆಂಬ ಐತಿಹ್ಯವಿದೆ. (ಲಕ್ಷ್ಮಣನಲ್ಲಿ ಸಂಕರ್ಷಣಾವೇಶ ರೂಪದಿಂದ)

★★★

## ಉಗಾಭೋಗ

''ಒಂದು ಕೈಯಲ್ಲಿ ಖಡ್ಗ ಒಂದು ಕೈಯಲ್ಲಿ ಹಲಗೆ
ಅಂದವಾಗಿ ಪಿಡಿದು ದಿವಾರಾತ್ರಿಯಲ್ಲಿ
ಬಂದು ಬದಿಯಲ್ಲಿ ನಿತ್ಯ ಬಾರಾಸನಾಗಿ
ಹಿಂದು ಮುಂದುಪದ್ರವಾಗದಂತೆ
ಇಂದಿರೆರಮಣ ಕಾಯುತ್ತಲಿರೆ ಎನಗಾವ
ಬಂಧನಗಳಿಲ್ಲ ಧನ್ಯ ಧನ್ಯ
ಕಂದರ್ಪನಯ್ಯ ಸಿರಿವಿಜಯ ವಿಟ್ಠಲರೇಯ
ಎಂದೆಂದಿಗಾಪತ್ತು ಬರಲೀಸನೋ'' ।

ಕಳ್ಳ ಕಾಕರು ಮೊದಲಾದ ದುಷ್ಟರು ಒಡ್ಡುವ ಆಪತ್ತುಗಳಿಂದ ಪಾರಾಗಲು ಮೇಲಿನ ಉಗಾಭೋಗವನ್ನು ವಿಜಯದಾಸರು ಗೋಪಾಲದಾಸರಿಗೆ ಉಪದೇಶಿಸಿದ್ದರು. ಅಂತೆಯೇ ಅವರು ಉಡುಪಿಯ ಸಮೀಪದ ''ಮಂಡಗದ್ದಿ'' ಗ್ರಾಮದ ''ಭೀಮ''ನೆಂಬ ದುಷ್ಟನ ಉಪಟಳದಿಂದ ಪಾರಾದರೆಂದು ಅವರ ಚರಿತ್ರೆಯಿಂದ ತಿಳಿಯುತ್ತದೆ.

ಜಗನ್ಮಾನ್ಯವಾದ ಭಗವದ್ಗೀತೆಯಲ್ಲಿ ನಮ್ಮನ್ನು ಅಧ್ಯಾತ್ಮದೆಡೆಗೆ ಕೊಂಡೊಯ್ಯುವ ಅಪೂರ್ವವಾದ ಕೆಲ ಸಂದೇಶಗಳು :-

''ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥''

ಪರಿಪೂರ್ಣವಾಗಿ ಆಚರಿಸಲ್ಪಟ್ಟ ಪರಧರ್ಮಕ್ಕಿಂತ ತನ್ನ ವರ್ಣಾಶ್ರಮ ಧರ್ಮಾಚರಣೆಯು ನ್ಯೂನತೆಯಿಂದ ಕೂಡಿದ್ದರೂ ಮೋಕ್ಷ ಸಾಧನವೇ ಸರಿ. ಅಷ್ಟೇ ಅಲ್ಲ ಸ್ವಧರ್ಮಾಚರಣೆ ಮಾಡುತ್ತಾ ಸಾಯುವುದೇ ಲೇಸು. ಕಾರಣ ಪರಧರ್ಮಾಚರಣೆಯು ಅನರ್ಥಕಾರಿ.

(ಉದಾ : ಬ್ರಾಹ್ಮಣನಿಗೆ ಶಾಸ್ತ್ರಾಧ್ಯಯನ, ಅಧ್ಯಾಪನ, ಜಪಾದಿಗಳು ಪರಮಧರ್ಮ. ಅವುಗಳ ತ್ಯಾಗ, ಕ್ಷತ್ರಿಯಾದಿ ವರ್ಣ ಧರ್ಮಗಳ ಆಚರಣೆ ಮೋಕ್ಷ ಸಾಧಕವಲ್ಲವೆಂದು ಭಾವ).

**''ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ'' ॥**

ನಿನ್ನ ಕರ್ತವ್ಯ ಕರ್ಮದಲ್ಲಿ ಮಾತ್ರ ನಿನಗೆ ಅಧಿಕಾರ (ಅರ್ಹತೆ); ಆ ಕರ್ಮಫಲಗಳಲ್ಲಿ ಅಧಿಕಾರವಿಲ್ಲ. ಕರ್ಮಾಚರಣೆಗೆ ಫಲಸಂಪಾದನೆಯನ್ನೇ ನಿಮಿತ್ತವಾಗಿಟ್ಟು ಕೊಳ್ಳಬೇಡ. (ಕಾರಣ ಫಲಕೊಡುವವನು ಭಗವಂತನು). ಆದ್ದರಿಂದ ಕರ್ಮ ಮಾಡದೆಯೂ ಇರಬೇಡ. ಇತ್ಯಾದಿ.

ತನಗೆ ಶಾಸ್ತ್ರ ವಿಧಿಸಿದ ಕರ್ತ್ಯವ್ಯಗಳನ್ನು ಭಗವತ್ಪ್ರೀತಿ ಉದ್ದಿಶ್ಯವಾಗಿ ಫಲದ ಆಶೆ ತೊರೆದು ಮಾಡುವುದೇ ಕರ್ಮಯೋಗದ ರಹಸ್ಯ.

**''ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ'' ॥** IV - 36

ಎಲ್ಲ ಪಾಪಿಗಳಿಗಿಂತ ಹೆಚ್ಚಿನ ಪಾಪಿ ನೀನಾಗಿದ್ದರೂ ಸರಿಯೆ;
ಎಲ್ಲ ಪಾಪಗಳನ್ನೂ ಜ್ಞಾನವೆಂಬ ನೌಕೆಯಿಂದ ದಾಟುವಿ.

(ಜೀವಿಗಳು ತಮ್ಮಹಿಂದಿನ ಅನಂತ ಜನ್ಮಗಳಲ್ಲಿ ಸಂಪಾದಿಸಿದ ಅನಂತ ಪಾಪಗಳನ್ನು ಅನುಭವಿಸಿ ಅಥವಾ ಪ್ರಾಯಶ್ಚಿತ್ತಾದಿಗಳಿಂದ - ಪರಿಹರಿಸಿಕೊಳ್ಳುವುದು ಅಸಾಧ್ಯ. ಅದಕ್ಕೆ ಭಗವಂತನ (ಅಪರೋಕ್ಷ) ಜ್ಞಾನ, ಅನುಗ್ರಹಗಳು ಅತ್ಯಂತ ಅವಶ್ಯವೆಂದು ಭಾವ.

ಭಗವಂತನ ಈ ಭರವಸೆಯು ನಿರಾಶಾ ಜೀವನವನ್ನು ಕೊನೆಗೊಳಿಸಿ ಜೀವನದಲ್ಲಿ ಉತ್ಸಾಹದ ಚಿಲುಮೆಯನ್ನು ತುಂಬುತ್ತದೆ.

"ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ" ॥ IV 33

ಅರ್ಜುನ, (ಹಿಂದೆ ಹೇಳಿದ) ದ್ರವ್ಯಯಜ್ಞ ಮುಂತಾದ ಎಲ್ಲ ಯಜ್ಞಗಳಿಗಿಂತ ಜ್ಞಾನಯಜ್ಞವೇ ಶ್ರೇಷ್ಠ. ಏಕೆಂದರೆ ಸಾಂಗವಾದ ಎಲ್ಲ ಕರ್ಮವೂ ಜ್ಞಾನ ಬಂದಾಗಲೇ ಸಫಲವಾಗುತ್ತದೆ.

"ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" ॥

ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರವಾದ (ಪಾವನವಾದ) ಮತ್ತೊಂದು ವಸ್ತುವಿಲ್ಲ. (ಅದು ವಜ್ರಾಯುಧದಂತೆ ರಕ್ಷಿಸುತ್ತದೆ).

## ಜ್ಞಾನ ಸಂಪಾದನೆ ಹೇಗೆ ?

"ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ " ॥ IV - 34

(ಭಗವಂತನ) ಆ ಜ್ಞಾನವನ್ನು (ಗುರುಗಳಿಗೆ) ನಮಸ್ಕಾರ, ಪ್ರಶ್ನೆಮಾಡುವುದು, ಸೇವೆಗಳಿಂದ ತಿಳಿದುಕೊ, ಪರಮಾತ್ಮನನ್ನು ಕಂಡ ಆ ಜ್ಞಾನಿಗಳು ಭಗವಂತನ ಜ್ಞಾನವನ್ನು ನಿನಗೆ ಉಪದೇಶಿಸುವರು.

"ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ" ॥ VI -5

ಜೀವನಿಗೆ ಮನವೇ (ಭಗವಂತನೇ) ಬಂಧು ಮತ್ತು ಶತೃ. ಆದ್ದರಿಂದ ಜೀವನು ತನ್ನನ್ನು ಮನಸ್ಸಿನಿಂದ (ಭಗವಂತನಿಂದ) ಮೋಕ್ಷಭಾಗಿಯನ್ನಾಗಿಸಬೇಕು. ದುಃಖ ಭಾಗಿಯನ್ನಾಗಿಸ ಕೂಡದು. ....

"ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ" ॥

ಸಾವಿರಾರು ಮನುಷ್ಯರಲ್ಲೊಬ್ಬ ಜ್ಞಾನಸಿದ್ಧಿಗಾಗಿ ಶ್ರಮಿಸಬಲ್ಲ. ಹಾಗೆ ಪ್ರಯತ್ನಿಸಿದ ಸಾವಿರಾರು ಜನರಲ್ಲಿ ಒಬ್ಬ ಸಿದ್ಧಿ ಪಡೆಯಬಲ್ಲ. (ಭಗವಂತನ ಜ್ಞಾನ ಅಷ್ಟು ಸುಲಭವಲ್ಲ ಎಂದು ಅಭಿಪ್ರಾಯ.)

ಉದಾಹರಣೆಗಾಗಿ ಬಾಹ್ಯಾಕಾಶಕ್ಕೆ ಹೋಗಲು ತರಬೇತಿಗೆ ಹೋದವರೆಲ್ಲ ಆಯ್ಕೆಗೊಳ್ಳುವುದಿಲ್ಲವಷ್ಟೇ !. ಯಾರೋ ಒಬ್ಬಿಬ್ಬರು ಆಯ್ಕೆಗೊಳ್ಳುವುದು ಲೋಕದಲ್ಲೂ ಕಂಡಿದೆ !. ಅಂತಹವನು ನಾನೂ ಏಕೆ ಆಗಬಾರದು !

## ಸಕಲಶಾಸ್ತ್ರ ಸಾರ ಯಾವುದು ?

"ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥

ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥

ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥

ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥

ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।
ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ ಕೃತಕೃತ್ಯಶ್ಚ ಭಾರತ ॥"

XV 16 ರಿಂದ 20

"ಲೋಕದಲ್ಲಿ ಕ್ಷರ, ಅಕ್ಷರರೆಂದು ಎರಡು ವಿಧ ಚೇತನರು. ಬ್ರಹ್ಮಾದಿಗಳು ಕ್ಷರ ಪುರುಷರು. ಲಕ್ಷ್ಮೀದೇವಿ ಅಕ್ಷರಪುರುಷಳು. ಇವರಿಬ್ಬರಿಗಿಂತ ಉತ್ತಮ ಪುರುಷನು ಬೇರೆಯೇ ಇದ್ದಾನೆ. ಅವನು ಈ ಲೋಕವೆಲ್ಲವನ್ನು ವ್ಯಾಪಿಸಿದ್ದಾನೆ. ಅವನು ನಾಶರಹಿತ. ಆದ್ದರಿಂದಲೇ ಅವನು ಪೌರುಷೇಯ, ಅಪೌರುಷೇಯ ಆಗಮಗಳಲ್ಲಿ ಪುರುಷೋತ್ತಮನೆಂದು ಪ್ರಸಿದ್ಧಿ ಹೊಂದಿದ್ದಾನೆ. ಹೀಗೆ ತಿಳಿದವನು ಸರ್ವಜ್ಞ ... ಇದೇ ಅತ್ಯಂತ ರಹಸ್ಯ ಶಾಸ್ತ್ರ ಇದನ್ನು ತಿಳಿದು ಅಪರೋಕ್ಷಜ್ಞಾನಿಯಾಗು, ಮುಕ್ತನಾಗು".

"ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ" ।

VII - 7

ಎಲೈ ಧನಂಜಯನೇ ! ನನ್ನ ದೆಶೆಯಿಂದ ಪರತರವಾದ (ಉತ್ತಮವಾದ) ಮತ್ತೊಂದು ವಸ್ತುವೇ ಇಲ್ಲ. ನಾನೇ ಸರ್ವೋತ್ತಮ. (ವಿವರಗಳಿಗೆ ಭಾಷ್ಯಾದಿಗಳನ್ನು ನೋಡಿರಿ). ...

**"ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ" ॥**

ನನ್ನನ್ನು ಮಾತ್ರ ಸರ್ವದಾ ಭಕ್ತ್ಯುದ್ರೇಕದಿಂದ ಆರಾಧಿಸುವ, ಸ್ಮರಿಸುವ ಭಕ್ತರ ಯೋಗಕ್ಷೇಮವನ್ನು ನಾನು ಹೊರುತ್ತೇನೆ. (ವಹಿಸಿಕೊಳ್ಳುತ್ತೇನೆ)....

**"ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ" ॥**

IX - 26

ಅನಿಷಿದ್ಧವಾದ ಎಲೆ, ಹೂವು, ಹಣ್ಣು, ನೀರು ಮುಂತಾದುವುಗಳನ್ನು ಯಾರು ಭಕ್ತಿಯಿಂದ ನನಗೆ ಸಮರ್ಪಿಸುತ್ತಾರೋ ಅವುಗಳನ್ನು ನಾನು ಸ್ವೀಕರಿಸುತ್ತೇನೆ. ...

ಭಕ್ತಿಯಿಂದ ಸಲ್ಲಿಕೆ ಮುಖ್ಯವೇ ಹೊರತು, ಏನು ಕೊಡುತ್ತಾನೆ ಎಂಬುದು ಮುಖ್ಯವಲ್ಲ.

**"ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ" ॥**

IX - 27

ಅರ್ಜುನ ನೀನು ಮಾಡುವ ವಿಹಿತಕರ್ಮ, ತಿನ್ನುವ ಅನಿಷಿದ್ಧ ಪದಾರ್ಥ, ಯಾವುದನ್ನು ಹೋಮ ಮಾಡುವೆಯೊ, ಸತ್ಪಾತ್ರರಿಗೆ ಮಾಡುವ ದಾನ, ವಿಹಿತ ತಪಸ್ಸು - ಎಲ್ಲವನ್ನು ನನಗೆ ಅರ್ಪಿಸು. (ಏಕೆಂದರೆ ಎಲ್ಲವನ್ನು ಸ್ವೀಕರಿಸುವ ಅರ್ಹತೆ - ಫಲಕೊಡುವ ಅಧಿಕಾರ ನನಗೆ ಮಾತ್ರ ಇದೆ).

**ಒಟ್ಟಾರೆ ಏನು ಮಾಡಬೇಕು ?**

**"ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ" ॥**

ನನ್ನಲ್ಲಿಯೇ ಮನಸ್ಸಿಡು, ನನ್ನ ಭಕ್ತನಾಗು, ನನ್ನನ್ನುದ್ದೇಶಿಸಿ ಯಜ್ಞಮಾಡು, ನನಗೆ ನಮಸ್ಕರಿಸು. ನೀನು ನನಗೆ ಪ್ರೀತಿಪಾತ್ರನಾದ್ದರಿಂದ ನನ್ನನ್ನೇ ಹೊಂದುವೆ ಎಂದು ಶಪಥ ಮಾಡುತ್ತೇನೆ.

**ಅರ್ಜುನ ! ಇಷ್ಟೆಲ್ಲಾ ಏಕೆ ಮಾಡಬೇಕು ಗೊತ್ತೇ ?**

"ವೇದೈಶ್ಚ ಸರ್ವೈರಹಮೇವ ವೇದ್ಯಃ ..."

........................ ॥

ನಾನೇ ಸಕಲ ವೇದಗಳಿಂದ ಪ್ರತಿಪಾದ್ಯ. ಆದ್ದರಿಂದ ನಾನೇ ಸರ್ವೋತ್ತಮ. (ಆದ್ದರಿಂದ ನನ್ನನ್ನು ಸರ್ವೋತ್ತಮತ್ವೇನ ಆರಾಧಿಸು. ಅಲ್ಲದೆ ಇತರ ದೇವತೆಗಳನ್ನು ನನ್ನ ಪರಿವಾರವೆಂದು ತಿಳಿದು ಅವರನ್ನೂ ಪೂಜಿಸು).

ಆದ್ದರಿಂದಲೇ ಶ್ರೀಮನ್ಮಧ್ವಾಚಾರ್ಯರು ತಮ್ಮ ಗೀತಾ ತಾತ್ಪರ್ಯದಲ್ಲಿ

".... ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋ ಧರ್ಮಃ ತದ್ವಿರುದ್ಧಃ ಸರ್ವೋಽಪಿ ಅಧರ್ಮಃ ...." ಎಂದು ಆದೇಶಿಸಿದ್ದಾರೆ.

★★★

## ಶ್ರೀ ಕೃಷ್ಣಾಷ್ಟೋತ್ತರಶತನಾಮಸ್ತೋತ್ರಮ್

ಶ್ರೀಕೃಷ್ಣಃ ಕಮಲಾನಾಥೋ ವಾಸುದೇವಃ ಸನಾತನಃ ।
ವಸುದೇವಾತ್ಮಜಃ ಪುಣ್ಯೋ ಲೀಲಾಮಾನುಷವಿಗ್ರಹಃ ॥ ೧ ॥

ಶ್ರೀವತ್ಸಕೌಸ್ತುಭಧರೋ ಯಶೋದಾವತ್ಸಲೋ ಹರಿಃ ।
ಚತುರ್ಭುಜಾತ್ತಚಕ್ರಾಸಿಗದಾಶಂಖಾದ್ಯುದಾಯುಧಃ ॥ ೨ ॥

ದೇವಕೀನಂದನಃ ಶ್ರೀಶೋ ನಂದಗೋಪಪ್ರಿಯಾತ್ಮಜಃ ।
ಯಮುನಾವೇಗಸಂಹಾರೀ ಬಲಭದ್ರಪ್ರಿಯಾನುಜಃ ॥ ೩ ॥

ಪೂತನಾಜೀವಿತಹರಃ ಶಕಟಾಸುರಭಂಜನಃ ।
ನಂದವ್ರಜಜನಾನಂದಃ ಸಚ್ಚಿದಾನಂದವಿಗ್ರಹಃ ॥ ೪ ॥

ನವನೀತವಿಲಿಪ್ತಾಂಗೋ ನವನೀತನಟೋಽನಘಃ ।
ನವನೀತನವಾಹಾರೋ ಮುಚುಕುಂದಪ್ರಸಾದಕಃ ॥ ೫ ॥

ಷೋಡಶಸ್ತ್ರೀಸಹಸ್ರೇಶಸ್ತ್ರಿಭಂಗೀ ಮಧುರಾಕೃತಿಃ ।
ಶುಕವಾಗಮೃತಾಬ್ಧೀಂದುರ್ಗೋವಿಂದೋ ಯೋಗಿನಾಂ ಪತಿಃ ॥ ೬ ॥

ವತ್ಸಪಾದಹರೋಽನಂತೋ ಧೇನುಕಾಸುರಭಂಜನಃ ।
ತೃಣೀಕೃತತೃಣಾವರ್ತೋ ಯಮಳಾರ್ಜುನಭಂಜನಃ ॥ ೭ ॥

ಉತ್ತಾಲತಾಲಭೇತ್ತಾ ಚ ತಮಾಲಶ್ಯಾಮಲಾಕೃತಿಃ ।
ಗೋಪಗೋಪೀಶ್ವರೋ ಯೋಗೀ ಕೋಟಿಸೂರ್ಯಸಮಪ್ರಭಃ ॥ ೮ ॥

ಇಳಾಪತಿಃ ಪರಂಜ್ಯೋತಿರ್ಯಾದವೇಂದ್ರೋ ಯದೂದ್ವಹಃ ।
ವನಮಾಲೀ ಪೀತವಾಸಾಃ ಪಾರಿಜಾತಾಪಹಾರಕಃ ॥ ೯ ॥

ಗೋವರ್ಧನಾಚಲೋದ್ಧರ್ತಾ ಗೋಪಾಲಃ ಸರ್ವಪಾಲಕಃ ।
ಅಜೋ ನಿರಂಜನಃ ಕಾಮಜನಕಃ ಕಂಜಲೋಚನಃ ॥ ೧೦ ॥

ಮಧುಹಾ ಮಥುರಾನಾಥೋ ದ್ವಾರಕಾನಾಯಕೋ ಬಲೀ ।
ವೃಂದಾವನಾಂತಃಸಂಚಾರೀ ತುಲಸೀದಾಮಭೂಷಣಃ ॥ ೧೧ ॥

ಸ್ಯಮಂತಕಮಣೇರ್ಹರ್ತಾ ನರನಾರಾಯಣಾತ್ಮಕಃ ।
ಕುಬ್ಜಾಗಂಧಾನುಲಿಪ್ತಾಂಗೋ ಮಾಯೀ ಪರಮಪೂರುಷಃ ॥ ೧೨ ॥
ಮುಷ್ಟಿಕಾಸುರಚಾಣೂರಮಲ್ಲಯುದ್ಧವಿಶಾರದಃ ।
ಸಂಸಾರವೈರೀ ಕಂಸಾರಿರ್ಮುರಾರಿರ್ನರಕಾಂತಕಃ ॥ ೧೩ ॥

ಅನಾದಿಬ್ರಹ್ಮಚಾರೀ ಚ ಕೃಷ್ಣಾವ್ಯಸನಕರ್ಷಕಃ ।
ಶಿಶುಪಾಲಶಿರಶ್ಛೇತ್ತಾ ದುರ್ಯೋಧನಕುಲಾಂತಕಃ ॥ ೧೪ ॥

ವಿದುರಾಕ್ರೂರವರದೋ ವಿಶ್ವರೂಪಪ್ರದರ್ಶಕಃ ।
ಸತ್ಯವಾಕ್ ಸತ್ಯಸಂಕಲ್ಪಃ ಸತ್ಯಭಾಮಾರತೋ ಜಯೀ ॥ ೧೫ ॥

ಸುಭದ್ರಾಪೂರ್ವಜೋ ವಿಷ್ಣುರ್ಭೀಷ್ಮಮುಕ್ತಿಪ್ರದಾಯಕಃ ।
ಜಗದ್ಗುರುರ್ಜಗನ್ನಾಥೋ ವೇಣುನಾದವಿಶಾರದಃ ॥ ೧೬ ॥

ವೃಷಭಾಸುರವಿಧ್ವಂಸೀ ಬಾಣಾಸುರಕರಾಂತಕಃ ।
ಯುಧಿಷ್ಠಿರಪ್ರತಿಷ್ಠಾತಾ ಬರ್ಹಿಬರ್ಹಾವತಂಸಕಃ ॥ ೧೭ ॥

ಪಾರ್ಥಸಾರಥಿರವ್ಯಕ್ತೋ ಗೀತಾಮೃತಮಹೋದಧಿಃ ।
ಕಾಲೀಯಫಣಮಾಣಿಕ್ಯರಂಜಿತಶ್ರೀಪದಾಂಬುಜಃ ॥ ೧೮ ॥

ದಾಮೋದರೋ ಯಜ್ಞಭೋಕ್ತಾ ದಾನವೇಂದ್ರವಿನಾಶನಃ ।
ನಾರಾಯಣಃ ಪರಂಬ್ರಹ್ಮ ಪನ್ನಗಾಶನವಾಹನಃ ॥ ೧೯ ॥

ಜಲಕ್ರೀಡಾಸಮಾಸಕ್ತಗೋಪೀವಸ್ತ್ರಾಪಹಾರಕಃ ।
ಪುಣ್ಯಶ್ಲೋಕಸ್ತೀರ್ಥಪಾದೋ ವೇದವೇದ್ಯೋ ದಯಾನಿಧಿಃ ॥ ೨೦ ॥

ಸರ್ವತೀರ್ಥಾತ್ಮಕಃ ಸರ್ವಗ್ರಹರೂಪೀ ಪರಾತ್ಪರಃ ।
ಏವಂ ಶ್ರೀಕೃಷ್ಣದೇವಸ್ಯ ನಾಮ್ನಾಮಷ್ಟೋತ್ತರಂ ಶತಮ್ ॥ ೨೧ ॥

ಕೃಷ್ಣೇನ ಕೃಷ್ಣಭಕ್ತಾನಾಂ ಗೀತಂ ಗೀತಾಮೃತಂ ಪರಮ್।
ಸ್ತೋತ್ರಂ ಕೃಷ್ಣಪ್ರಿಯತಮಂ ಶ್ರುತಂ ತಸ್ಮಾನ್ಮಯಾ ಪರಮ್ ॥ ೨೨ ॥

ಕೃಷ್ಣನಾಮಾಮೃತಂ ನಾಮ ಪರಮಾನಂದಕಾರಣಮ್ ।
ಈತಿಬಾಧಾದಿದುಃಖಘ್ನಂ ಪರಮಾಯುಷ್ಯವರ್ಧನಮ್
ಅತ್ಯುಪದ್ರವದೋಷಘ್ನಂ ಪರಮಾಯುಷ್ಯವರ್ಧನಮ್ ॥ ೨೩ ॥

ದಾನಂ ವ್ರತಂ ತಪಸ್ತೀರ್ಥಂ ಯತ್ಕೃತಂ ತ್ವಿಹ ಜನ್ಮನಿ ।
ಜಪತಾಂ ಶೃಣ್ವತಾಮೇತತ್ ಕೋಟಿಕೋಟಿಗುಣಂ ಭವೇತ್ ॥ ೨೪ ॥

ಪುತ್ರಪ್ರದಮಪುತ್ರಾಣಾಮಗತೀನಾಂ ಗತಿಪ್ರದಮ್ ।
ಧನಾವಹಂ ದರಿದ್ರಾಣಾಂ ಜಯೇಚ್ಛೂನಾಂ ಜಯಾವಹಮ್ ॥ ೨೫ ॥

ಶಿಶೂನಾಂ ಗೋಕುಲಾನಾಂ ಚ ಪುಷ್ಟಿದಂ ಪೂರ್ಣಪುಣ್ಯದಮ್ ।
ಬಾಲರೋಗಗ್ರಹಾದೀನಾಂ ಶಮನಂ ಶಾಂತಿಮುಕ್ತಿದಮ್ ॥ ೨೬ ॥

"ಸಮಸ್ತಕಾಮದಂ ಸದ್ಯಃ ಕೋಟಿಜನ್ಮಾಘನಾಶನಮ್ ।
ಅಂತೇ ಕೃಷ್ಣಸ್ಮರಣದಂ ಭವತಾಪತ್ರಯಾಪಹಮ್ " ॥ ೨೭ ॥

"ಕೃಷ್ಣಾಯ ಯಾದವೇಂದ್ರಾಯ ಜ್ಞಾನಮುದ್ರಾಯ ಯೋಗಿನೇ ।
ನಾಥಾಯ ರುಗ್ಮಿಣೀಶಾಯ ನಮೋ ವೇದಾಂತವೇದಿನೇ"॥ ೨೮ ॥

ಇಮಂ ಮಂತ್ರಂ ಜಪನ್ ನಿತ್ಯಂ ವ್ರಜಂಸ್ತಿಷ್ಠನ್ ದಿವಾ ನಿಶಿ ।
ಸರ್ವಗ್ರಹಾನುಗ್ರಹಭಾಕ್ ಸರ್ವಪ್ರಿಯತಮೋ ನರಃ ॥ ೨೯ ॥

ಪುತ್ರಪೌತ್ರೈಃ ಪರಿವೃತಃ ಸರ್ವಸಿದ್ಧಿ ಸಮೃದ್ಧಿಮಾನ್ ।
ನಿರ್ವಿಶ್ಯ ಭೋಗಾನಂತೇಽಪಿ ಕೃಷ್ಣಸಾಯುಜ್ಯಮಾಪ್ನುಯಾತ್ ॥ ೩೦ ॥

॥ ಇತಿ ಶ್ರೀಬ್ರಹ್ಮಾಂಡಪುರಾಣೇ ಬ್ರಹ್ಮನಾರದಸಂವಾದೇ
ಶ್ರೀಕೃಷ್ಣಾಷ್ಟೋತ್ತರಶತನಾಮಸ್ತೋತ್ರಮ್ ॥

# ಗುರು ಪರಂಪರಾ ಸ್ತೋತ್ರ

"ಬ್ರಹ್ಮಾಂತಾಃ ಗುರವಃ ಸಾಕ್ಷಾದಿಷ್ಟಂ ದೈವಂ ಶ್ರಿಯಃ ಪತಿಃ ।
ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥

ಮಾತರ್ಮೇ ಮಾತರಿಶ್ವನ್ ಪಿತರತುಲಗುರೋ ಭ್ರಾತರಿಷ್ಟಾಪ್ತಬಂಧೋ
ಸ್ವಾಮಿನ್ ಸರ್ವಾಂತರಾತ್ಮನ್ನಜರಜರಯಿತರ್ಜನ್ಮ ಮೃತ್ಯಾಮಯಾನಾಂ
ಗೋವಿಂದೇ ದೇಹಿ ಭಕ್ತಿಂ ಭವತಿ ಚ ಭಗವನ್ನೂರ್ಜಿತಾಂ ನಿರ್ನಿಮಿತ್ತಾಂ ।
ನಿರ್ವ್ಯಾಜಾಂ ನಿಶ್ಚಲಾಂ ಸದ್ಗುಣಗಣಬೃಹತೀಂ ಶಾಶ್ವತೀಮಾಶುದೇವ ॥"

ವಾಯುಸ್ತುತಿ - 14

ನಮಸ್ತೇ ಪ್ರಾಣೇಶ ಪ್ರಣತವಿಭವಾಯಾವನಿಮಗಾಃ
ನಮಃ ಸ್ವಾಮಿನ್ ರಾಮ ಪ್ರಿಯತಮ ಹನೂಮನ್ ಗುರುಗುಣ ।
ನಮಸ್ತುಭ್ಯಂ ಭೀಮ ಪ್ರಬಲತಮ ಕೃಷ್ಣೇಷ್ಟ ಭಗವನ್
ನಮಃ ಶ್ರೀಮನ್ಮಧ್ವ ಪ್ರದಿಶ ಸುದೃಶಂ ನೋ ಜಯ ಜಯ ॥

ಸುಮಧ್ವವಿಜಯ 16 - 57

ಯೇನಾಹಮಿಹ ದುರ್ಮಾರ್ಗಾದುದ್ಧೃತ್ಯಾಭಿನಿವೇಶಿತಃ ।
ಸಮ್ಯಕ್ ಶ್ರೀವೈಷ್ಣವೇ ಮಾರ್ಗೇ ಪೂರ್ಣಪ್ರಜ್ಞಂ ನಮಾಮಿ ತಮ್ ॥

ತಮೋನುದಾನಂದಮವಾಪಲೋಕಸ್ತತ್ತ್ವಪ್ರದೀಪಾಕೃತಿಗೋಗಣೇನ ।
ಯದಾಸ್ಯಶೀತಾಂಶುಭುವಾ ಗುರೂಂಸ್ತಾಂಸ್ತ್ರಿವಿಕ್ರಮಾರ್ಯಾನ್ ಪ್ರಣಮಾಮಿ ವರ್ಯಾನ್ ॥

ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥

ಅಂಜನಾಸೂನುಸಾನ್ನಿಧ್ಯಾತ್ ವಿಜಯೇನ ವಿರಾಜಿತಮ್ ॥
ಅಜಿತಪ್ರೀತಿಜನಕಂ ಭಜೇಽಹಂ ವಿಜಯಧ್ವಜಮ್ ।

ಕಂಸಧ್ವಂಸಿಪದಾಂಭೋಜಸಂಸಕ್ತೋ ಹಂಸಪುಂಗವಃ ।
ಬ್ರಹ್ಮಣ್ಯಗುರುರಾಜಾಖ್ಯೋ ವರ್ತತಾಂ ಮಮ ಮಾನಸೇ ॥

ಕಾಲೇ ಫಲತಿ ಸುರದ್ರುಃ ಚಿಂತಾಮಣಿರಪಿ ಯಾಚನೇ ದಾತಾ ।
ವರ್ಷತಿ ಸಕಲಮಭೀಷ್ಟಂ ದರ್ಶನಮಾತ್ರಾತ್ ಶ್ರೀಪಾದರಾಣ್ಮುನಿಃ ॥

ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥

ತಪೋವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವ ದಯಾಶ್ರಯಾನ್ ॥

ಪ್ರಣಮತ್ಕಾಮಧೇನುಂ ಚ ನಮತ್ಕುರತರೂಪಮ್ ।
ಶ್ರೀಭಾವಬೋಧಕೃತ್ಪಾದ ಚಿಂತಾಮಣಿ ಮುಪಾಸ್ಮ ಹೇ ॥

ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ
ಶ್ರೀ ರಾಘವೇಂದ್ರಗುರವೇ ನಮೋಽತ್ಯಂತ ದಯಾಲವೇ ॥

ಆಪಾದಮೌಲಿ ಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯತಿ ಸಿಧ್ಯಂತಿ ಚ ಮನೋರಥಾಃ ॥

ಪೃಥ್ವೀಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ
ವೈಷ್ಣವಾ ವಿಷ್ಣುಹೃದಯಾಸ್ತಾನ್ನಮಸ್ಯೇ ಗುರೂನ್ಮಮ ॥



## ಹರಿದಾಸರಿಗೆ ನಮನಗಳು

ಮನ್ಮನೋಽಭೀಷ್ಟವರದಂ ಸರ್ವಾಭೀಷ್ಟ ಫಲಪ್ರದಮ್ ।
ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಮ್ ॥

ಅಜ್ಞಾನತಿಮಿರಚ್ಛೇದಂ ಬುದ್ಧಿ ಸಂಪತ್ಪ್ರದಾಯಕಮ್ ।
ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯಗುರುಂ ಭಜೇ ॥

ಭೂಪಾಲನತಪಾದಾಬ್ಜಂ ಪಾಪಾಲಿಪರಿಹಾರಿಣಮ್ ।
ವಿಜ್ಞಾನವಿಮಲಂ ಶಾಂತಂ ಗೋಪಾಲಹರಿದರ್ಶನಮ್ ।

ಜಲಜೇಷ್ಟನಿಭಾಕಾರಂ ಜಗದೀಶ ಪದಾಶ್ರಯಮ್ ।
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ ॥

## ರಾಗ ನಾಟಿ - ಸುಳಾದಿ - ಧ್ರುವತಾಳ

ಅನ್ನಂತ ಕಾಲದಲ್ಲಿ ನಿನ್ನ ನಾನರಿಯದೆ ಭವಗಳಲ್ಲಿ ಬಂದೆನೊ
ಅನ್ನಂತ ಕಾಲದಲ್ಲಿ ನಿನ್ನವನೆನಿಸದೆ ಮೂರುಖನಾದೆನೊ
ಅನ್ನಂತ ಕಾಲದಲ್ಲಿ ನಿನ್ನ ಚರಣ ರತಿಯಿಲ್ಲದೆ ನೊಂದೆನೊ
ಅನ್ನಂತ ಕಾಲದಲ್ಲಿ ಅದಾವ ಪುಣ್ಯದಿಂದ ಬಂದು ಇಂದು
ನಿನ್ನವನೆನಿಸಿದೆ ಅದಾವ ಪುಣ್ಯದಿಂದಲೆನ್ನ ಮನ
ನಿನ್ನಲ್ಲೆರಗಿತೊ ನೋಯದಂತೆ
ಎನ್ನ ಪೊರೆದು ಪಾಲಿಸೋ ದೀನನಾಥ ಶ್ರೀರಂಗವಿಠಲ



## ನಮ್ಮ ಪ್ರಕಾಶನಗಳು

| | | |
|---|---|---|
| 1. | ಶ್ರೀ ಗರುಡ ಶೇಷ ಶಿವ ಸ್ತೋತ್ರಮಂಜರೀ | 20=00★ |
| 2. | ವಿಘ್ನೇಶ್ವರ ಸ್ತೋತ್ರಮಂಜರೀ | 20=00★ |
| 3. | ತುಳಸೀ ಸ್ತೋತ್ರಮಂಜರೀ | 15-00 |
| 4. | ಮಂಗಳಗೌರೀ ಸ್ವರ್ಣಗೌರೀ ವ್ರತಗಳು | 12=00 |
| 5. | ಮಹಾಭಾರತದ ಉಪಾಖ್ಯಾನಗಳು ಭಾಗ 1 | 20=00 |
| 6. | ಭಾಗವತ ಶ್ಲೋಕಮಂಜರೀ ಭಾಗ 1 ಮತ್ತು 2 | 30=00 |
| 7. | ಅನಂತ | 120=00 |
| 8. | ಭಾಗವತ ಸಾರೋದ್ಧಾರ ಸೂಕ್ತಿಗಳು | 15=00 |

(ದ್ವೈತ ವೇದಾಂತ ಅಧ್ಯಯನ ಮತ್ತು ಸಂಶೋಧನಾ ಸಂಸ್ಥೆ ಪ್ರಕಾಶನ)

★ಪ್ರತಿಗಳು ಮುಗಿದಿವೆ.

ಮಾನವ ಜನ್ಮ ದೊಡ್ಡದು ಇದ
ಹಾನಿ ಮಾಡಲಿ ಬೇಡಿ ಹುಚ್ಚಪ್ಪಗಳಿರಾ

ಕಣ್ಣು ಕೈಕಾಲ್ಕಿವಿ ನಾಲಿಗೆ ಇರಲಿಕ್ಕೆ
ಮಣ್ಣುಮುಕ್ಕಿ ಮರುಳಾಗುವರೇ
ಹೆಣ್ಣು ಹೊನ್ನು ಮಣ್ಣಿಗಾಗಿ ಹರಿಯನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ ॥೧॥

ಕಾಲನದೂತರು ಕಾಲ್ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೇ
ಧಾಳಿ ಬಾರದ ಮುನ್ನ ಧರ್ಮವ ಗಳಿಸಿರೊ
ಹಾಳು ಸಂಸಾರದ ಸುಳಿಗೆ ಸಿಕ್ಕಲು ಬ್ಯಾಡಿ ॥೨॥

ಏನು ಕಾರಣ ನೀವು ಯದುಪತಿಯ ಮರೆತಿರಿ
ಧನ-ಧಾನ್ಯ ಸತಿ-ಸುತರದು ನಿತ್ಯವೇ
ಇನ್ನಾದರು ನೀವು ಏಕೋ ಭಾವದಿಂದ
ಚೆನ್ನ ಶ್ರೀಪುರಂದರ ವಿಠಲರಾಯನ ಭಜಿಸಿ ॥೩॥

